101

# ಉತ್ತರನ ಪೌರುಷ

(ಯಕ್ಷಗಾನ)

★

ಲೇಖಕ:

ಶ್ರೀ। ಪುಟ್ಟಣ್ಣ, ಮಂಗಳೂರು.

1956.

ಒಂದಾಣೆ ಮಾಲೆ

# ಉತ್ತರನ ಪೌರುಷ

## (ಯಕ್ಷಗಾನ)

ಪಾತ್ರಗಳು

ಉತ್ತರ— ವಿರಾಟನ ಪುತ್ರ.
ಉತ್ತರೆ— ಉತ್ತರನ ತಂಗಿ.
ಬೃಹನ್ನಳೆ— ನಪುಂಸಕ ವೇಷದ ಪಾರ್ಥ.
ಸೈರಂಧ್ರಿ ಯಾ ದ್ರೌಪದಿ.
ಭೀಷ್ಮ, ದ್ರೋಣ, ಚಾರಕರು, ಕರ್ಣ, ಕೌರವ—ಇತ್ಯಾದಿ.

|| ವಾರ್ಧಿಕ ||

ನಮಿಪೆ ನಾರಾಯಣಗೆ ನರಗೆ ಪುರುಷೋತ್ತಮಗೆ ।
ನಮಿಸುವೆ ಕಿರೀಟಕುಂಡಲ ಶೋಭಿತಗೆ ಹರಿಗೆ ।
ನಮಿಪೆ ದೇವಪ್ರಿಯಗೆ ಯದುಕುಲ ಶಿರೋಮಣಿಗೆ
ಭಾಗವತಜನ ಪುರುಷಗೆ ।
ನಮಿಪೆ ವೇದವ್ಯಾಸ ಮುನಿವರಗೆ ಮಹಿತನಿಗೆ ।
ನಮಿಪೆ ವಿಘ್ನೇಶನಿಗೆ ಮಂದಪೂರ ಚೆನ್ನಿಗಗೆ ।
ನಮಿಪೆ ವಿದ್ಯಾಧಿದೇವತೆಗಮಿತ ಜನವಂದ್ಯ ರಘುಪತಿಗೆ
ಭಕುತಿಯಿಂದ || ೧ ||
ಕುರುಕುಲಾಧಿಪನೆಂದ ವಚನವನು ಕೇಳುತ್ತ ।
ವರಸುಶರ್ಮಾದಿಗಳು ಅರಿಭಯಂಕರರೆನಿಸಿ ।
ತುರುಗಳನ್ನಪಹರಿಸೆ ದಕ್ಷಿಣದೊಳಾಕ್ರಮಿಸೆ ಸದೆಬಡಿದು
ಗೋಪಾಲರ ||
ಅರಸು ಸುದ್ದಿಯನರಿತು ನೆರೆದ ಸೈನಿಕರೊಡನೆ ।
ಹರಿಯೆ ಗತಿಯೆಂದೆನುತ ವಲಲಾದಿಗಳ ಕೂಡಿ ।
ಅರಿಯನಿರಿಯುವೆನೆಂದು ಸರಿಯಲುತ್ತರನಿತ್ತಲಂತಃ
ಪುರದೊಳಿದ್ದನು || ೨ ||

॥ ಭಾಮಿನಿ ॥

ಕುವರನಾ ವನಿತೆಯರ ಗಡಣದಿ ।
ಕುವರಿಯುತ್ತರೆಯೊಡನೆ ವಿಭವದಿ ।
ಮೆರೆಯುತಿರೆ ಬವರದಿ ಮಹೀಶಗೆ ವಿಜಯವಾಯ್ತೆಂದು ।
ಹರುಷ ಮಿಗೆ ಧಾವಿಸುತ ಚಾರನು ।
ನೃಪಸೂನುವಿಗೆರಗಿ ತಿಳಿಸಲು ।
ಭಳಿರೆ ಸಾಹಸ ಮೆಚ್ಚಿದೆನು ಎಂದುತ್ತರನು ನುಡಿದ ॥ ೧ ॥

॥ ದ್ವಿಪದಿ ॥

ಉತ್ತರನು ಸಂತಸದಿ ಬಂದ ಚಾರನಿಗೆ । ಉತ್ತರೀಯವನಿತ್ತನುತ್ಸಾಹ ಯುತಗೆ ॥ ೧ ॥ ಸಂತಸದ ಸುದ್ದಿಯನು ಪೇಳಿದಾ ದೂತ । ಸಂತಸದಿ ತೆರಳೆ ಬಹುಮಾನ ಪಡೆದಾತ ॥ ೨ ॥ ಪುರವ ಸಿಂಗರಿಸಿರೈ ಬೇಗನೆಂದೆ ನುತಾ । ಪುರಮುಖ್ಯರಿಂಗಪ್ಪಣೆಯನಿತ್ತನೀತ ॥ ೩ ॥

॥ ಕಂದ ॥

ಈಪರಿ ಸಂತಸದಿಂದಲಿ ।
ಭೂಪಾಲನ ಪುತ್ರನಿರಲು ಗೋವಳನೊಬ್ಬಂ ॥
ತಾಪದಿ ಧಾವಿಸುತುತ್ತರ ।
ಭೂಪನ ಕಾಲ್ಗೆಡಿಯೊಳುರುಳಿ ಪೊರೆಯೆಂದೊರೆದಂ ॥ ೧ ॥

॥ ರಾಗ–ತೋಡಿ; ಅಷ್ಟತಾಳ ॥

ಯಾರಯ್ಯಾ ! ನೀನು । ಯಾರಯ್ಯಾ ॥ ಯಾರಯ್ಯಾ ಭಯದಿಂದ ನಡುಗುವುದೇತಕ್ಕೆ । ಕಾರಣವೇನಿದೆ ಪೇಳ್ವುದು ಬೇಗನೆ । ಯಾರಯ್ಯಾ ॥ ಸುರರೋ ದಾನವರೋ ಯಾರಿಂದಲೀಗತಿಯಾಯ್ತು । ಹರನೇ ಬಂದರು ಹೊಡೆ ಹೊಡೆಬಟ್ಟುವೆನು ಕೇಳು । ಬರಿದೇ ಕೂತಿರುವುದೇತಕೆ ಬಳಿಸಾರಿ । ಕರಗಳ ಬಿಗಿದಿಹ ಖಳನಾರು ಪೇಳು ॥ ೧ ॥ ಮೂಗಿನ ಮೇಲೆ ತೋರುವ ನಾಮವೇನು । ಬೇಗ ಪೇಳೀಳು ನಾಲಗೆಯಿಲ್ಲವೇನು । ಸಾಗಿ ಬಂದಿಹರಾರು ನುಡು ನುಡು ಧೈರ್ಯವ । ಸಾಗುವೆನೀಗಳೆ ತರಿಯೆ ದುರ್ಮತಿಯ ॥ ಯಾರಯ್ಯಾ ॥ ೨ ॥

|| ಕಂದ ||

ಒಡೆಯನ ಮಾತನು ಕೇಳುತ |
ಲಡಿಗಡಿಗುಂ ತಲೆಯ ಬಾಗಿ ನಮಿಸುತ ಗೊಲ್ಲಂ ||
ನುಡಿದಂ ಕೇಳ್ವುದು ರಾಜನೆ |
ಹೊಡೆಯುದಿರೀ ಭಾಗ್ಯಹೀನ ಗೋಪಾಲಕನಂ || ೧ ||

|| ರಾಗ ಮುಖಾರಿ—ಏಕತಾಳ ||

ಯುವರಾಜ ನೀಲಾಲಿಸಯ್ಯ | ಹೊಡೆಯುದಿರೆನ್ನ | ಈ ವಚನವ ಲಾಲಿಸಯ್ಯ || ಕೌರವ ಮೊದಲಾದ | ಕರಿಪುರದರಸರು | ಸಾಗಿ ಬಂದಿಹ ರಿತ್ತ | ಧಾರಿಣಿಗೊಡೆಯರು | ಭೂರಿ ಸೇನೆಯ ಕೂಡಿ | ವೀರಾದ್ಯರನು ಸೇರಿ | ಭಾರಿ ಹಾನಿಯುಗೈವ | ರೂರನೆ ಸುಡುವರು || ೧ || ಉತ್ತರ ದೆಸೆ ಯೆಡೆಯಿಂದ | ನಮ್ಮೆಲ್ಲರ | ನೊತ್ತಿ ಮುತ್ತುವರಯ್ಯ ದಿಟವು || ಮತ್ತೆ ಶತಾವಳಿ | ಮುತ್ತೆ ಬೆದರಿಡೆವೆ | ಪ್ಮತ್ತ ನೋಡಯ್ಯ ನೀ | ನಿತ್ತು ತಾ ಧೈರ್ಯವ | ಮುತ್ತಿದ ಜನರಿಂ | ದೆತ್ತಿಕೊ ನಿನ್ನಯ | ಉತ್ತಮ ತುರು ಗಳ | ನುತ್ತರ ಕುವರನೆ || ೨ ||

|| ರಾಗ ಸೌರಾಷ್ಟ್ರ; ತ್ರಿವುಡೆ ತಾಳ ||

ಕೇಳಿ ಕಿಡಿಕಿಡಿಯಾಗಿ ಪ್ರಳಯದ | ಕಾಲಭೈರವನಂತೆ ಗರ್ಜಿಸು | ತಾಲತಾಂಗಿಯರೆಲ್ಲ ನಡುಗೆ ಕು | ಮಾರನೆಂದ || ೧ ||

|| ರಾಗ ಮಾರವಿ; ಏಕತಾಳ ||

ನಡೆ ನಡೆ ನಿಲ್ಲದಿ | ರಡಗುವ ಪಾತಕಿ | ತಡೆಯದೆ ವೈರಿಗಳ || ಮಡಿ ಯುಡೆ ಸಮರದೊ | ಳಡಿಯನು ಹಿಂದ | ಕ್ಕಿಡುತೇಕೈ ತಂದೆ || ೧ || ಸುಣ್ಣದ ನಾಮವು | ಕಣ್ಣಿನ ಮರೆಗಿದೆ | ಬಣ್ಣದ ಮೀಸೆಯನು || ಬಣ್ಣಿಸಿ ನಗುವರು | ಮಣ್ಣನು ತಿನ್ನುತ | ತಣ್ಣಗೆ ನಿಲ್ಲದಿರು | ತೊಲತೊಲಗೀಕ್ಷಣ | ಸಲೆ ಹೇಡಿಯೆ ನೀ | ನಿಲದಿರು ನನ್ನೆದುರು || ಕಲಹಕೆ ಬೆದರುತ | ಕೊಳೆ ಯಧಿರೀ ಪರಿ | ತೊಲಗೆನ್ನೆದುರಿಂದ || ೩ ||

|| ರಾಗ ಕಾಂಭೋಜ; ಝುಂಪೆ ತಾಳ ||

ಉತ್ತರಂ ಗೋವಳನ | ನೊತ್ತರಿಸುತೀಪರಿಯೊ | ಳುತ್ತರೆಯ ಕರೆದು ಸಂಗತಿಯ | ಬಿತ್ತರಿಸಲಾ ಕುವರಿ | ಪತ್ತನವ ಕಾಯುವುದೆ | ಉತ್ತರನ

ಹೊರಿಯೊಂದಳಿರದೆ ॥ ೧ ॥ ಪಿತನಾಣತಿಯನರಿದು । ಸುತ ನಡೆಯುವುದೆ ಸರಿಯು । ಮತಿವಂತನೀನಲ್ಲವೇನು ॥ ಕ್ಷಿತಿಯೊಳಗೆ ನಿನ್ನಂಥ । ಸುತರಿಲ್ಲ ವೆನೆ ಪಿತನು । ಅತುಳ ಸನ್ನಾಹವನ್ನೆಸಗು ॥ ಎಂದ ತಂಗಿಯ ಮಾತ । ನಂದದಿಂ ಕೇಳುತ್ತ । ಮಂದಮತಿ ಭೂಮಿಪತಿಸುತನು ॥ ಬಂದ ಕೌರವ ಸೇನೆ । ಬಂಧವರಿಯದ ಕುರಿಗ । ಳೊಂದು ಕೂಟವೆನುತ್ತ ನುಡಿದ ॥ ೩ ॥

॥ ಭಾಮಿನಿ ॥

ನಡೆನಡೆಯೊ ಅಗ್ರಭವ ನಿನ್ನಯ ।
ಪಡಗರವ ತೋರುತ್ತಲರಿಗಳ ।
ಹೊಡೆ ಬಿಡದೆ ಕಲಿ ನೀನು ಲೆಕ್ಕಿಸದವರ ಸತ್ವಗಳ ॥
ಅಡಿಗಡಿಗು ಕರಿತುರಗ ರಥಗಳ ।
ಕೆಡಹಿ ರಕ್ಷಿಸು ಧೇನುವೃಂದವ ।
ನಡೆ ವಿಜಯಿಯಾಗೆಂದು ಪ್ರೋತ್ಸಾಹಿಸಿದಳಾ ಕುವರಿ ॥ ೧ ॥

॥ ವಾರ್ಧಿಕ ॥

ಪಾಂಡುಸುತರಂತಲ್ಲ ಉತ್ತರನು ಮಾನನಿಧಿ ।
ದಂಡಧರನೀತನೆಂಬುದ ತಿಳಿಸು ಕೌರವಗೆ ।
ಪಾಂಡವರು ಹೇಡಿಗಳು ಕಾಡೊಳಲೆದರು ಸಾವಿಗಂಜಿ ವನವಾಸವೆಂದು ॥
ಗಂಡಗಂಡರ ಗಂಡ ಬೆದರಿಕೆಗೆ ಬೆದರುವೆನೆ ।
ಚಂಡಪ್ರಚಂಡನಿದಿಗೊ ಹೊರಡುವೆನು ಸಮರಕ್ಕೆ ।
ಭಂಡರನು ಕೆಡಹಿ ಸವರುವೆ ತಂಡತಂಡವೆಂದುತ್ತರನು ಬೊಬ್ಬಿರಿದನು ॥೧॥

॥ ರಾಗ ಭೈರವಿ; ಏಕತಾಳ ॥

ಚಿಂತಿಸಬೇಡೆಲೆ ತಂಗಿ । ಅವ । ರಂತಕನಾ ಭದ್ರಾಂಗಿ ॥ ಅಂತವ ರೆಡೆಯೊಳಗಾರು । ನಿ । ನ್ನಂತಹ ವೀರರಪಾರು । ಹಾರುವರಿಗೆ ಬೆದರು ವೆನೆ । ನಾ । ವಾರುವರನು ಹಾರಿಸೆನೆ । ಭಾರಿ ಮಹಾತ್ಮರೊ ಹೇಳು । ಆ । ಕೌರವ ರಾಜರು ಕೇಳು । ಸೂತನ ಮಗನಿರಬಹುದು । ಅದ । ಕೇತಕೆ ಚಿಂತೆಯು ಬಹುದು ॥ ಭೀತಿಯ ಬಿಡುಬಿಡು ನೀನು । ನಾ । ಸೋತರೆ ಕ್ಷತ್ರಿ ಯನೇನು । ಎಲ್ಲರು ಸರಿಸಮರೆನಗೆ । ಅವ । ರಲ್ಲವು ಸಮ ಕುವರನಿಗೆ । ಬಲ್ಲೆನು ಸಮರದ ಪರಿಯ । ನಾ । ನೊಲ್ಲೆನು ಭೀತಿಯ ಬಿರಿಯ ॥ ೧ ॥

|| ಕಂದ ||

ಈ ಪರಿಯುಸಿರುತಲುತ್ತರ |
ಭೂಪಾಲನದೇನೊ ಮನದಿ ಚಿಂತಿಸಿ ಸುಯ್ದಂ ||
ಕೋಪಾದಿಗಳನು ತ್ಯಜಿಸುತ |
ತಾ ಪೌರುಷಹೀನನಾಗಿ ಶಿರ ಬಾಗಿಸಿದಂ || ೧ ||

|| ವಚನ ||

ಈ ತೆರದೊಳುತ್ತರಂ ಸುಮ್ಮಗಾದುದರರ್ಥವನ್ನರಿಯದವಳಾಗಿ ಉತ್ತರೆಯು ನುಡಿದ ಪರಿಯೆಂತೆನೆ ||

|| ರಾಗ ಪಂತುರಾವಳಿ; ಅಷ್ಟತಾಳ ||

ಏನಯ್ಯಾ | ಅಣ್ಣಾ | ಏನಯ್ಯಾ || ಏನಯ್ಯ ಅಣ್ಣಯ್ಯ ನೀ ಮಾನ ನಿಧಿಯಂತೆ | ಅನಕಾಧಿಪನನ್ನು ಗೆಲ್ಲುವೆಯಂತೆ || ಹೀನ ಭಯಾದಿಗಳನ್ನು ತೊರೆವೆಯಂತೆ | ಏನು ಗಲ್ಲಕೆ ಕೈಯ ಪಿಡಿದಿಂತು ಕುಳಿತೆ || ಏನಯ್ಯಾ || ೧ || ಕಾರಣವೇನಯ್ಯ ನಿನ್ನ ಚಿಂತೆಗಳಿಗೆ | ಸಾರಿಪೇಳದನೊಮ್ಮೆ ಪರಿಹಾರವಿಲ್ಲವೇ | ಈ ರೀತಿಯಿರಲಾಗಿ ಪಶುಗಳ ಗತಿಯೇನು | ತೋರೊಮ್ಮೆ ನಿನ್ನಯ ಮನದ ಪರಿಯನು || ಏನಯ್ಯಾ || ೨ ||

|| ಭಾಮಿನಿ ||

ಎನಲು ತರುಣಿಯ ಮಾತ ಕೇಳುತ |
ಮನದ ಚಿಂತೆಯು ಮಿಗಲು ನೃಪತಿಯ |
ತನುಜನೆಂದನು ಕುವರಿ, ಪೇಳುವದೇನು ಸಮರದಲಿ ||
ಮನುಜ ಕುಲವನೆ ಮುರಿದು ಕೆಡಹುವ |
ಮನವಿಹುದು ಸಾರಥಿಯು ಇಲ್ಲದೆ |
ಮನವಮುರಿದು ಮನೆಯೊಳಗೆ ಕುಳಿತಿಹೆನೆಂದು ಹಲುಬಿದನು || ೧ ||

|| ರಾಗ ಆನಂದ ಭೈರವಿ; ಏಕತಾಳ ||

ಚಿಂತೆಯಿಂದ ನುಡಿವ ನುಡಿಯು | ತಂಗಿ ಕೇಳು || ನಿನ್ನ | ಅಂತರಾತ್ಮ ನುಡಿವುದೇನು | ತಂಗಿ ಪೇಳು || ೧ || ಕೊರತೆಯೊಂದು ಬಾಧಿಸುತಿದೆ | ಕುವರಿ ಕೇಳು || ಅದನು ಹರಿಸಲೇನುಪಾಯವೆಂದು | ಕುವರಿ ಪೇಳು || ೨ || ಸೇನೆಯೆಲ್ಲ ಸಮರದೊಳಿದೆ | ತಂಗಿ ಕೇಳು || ಇರಲಿ, ಸೇನೆ

ಬೇಡ ಚಿಂತೆಯಿಲ್ಲ । ತಂಗಿ ಕೇಳು ॥ ೩ ॥  ಸೂತನಿಲ್ಲದೇನುಗೈವೆ । ಭದ್ರೆ ಪೇಳು ॥ ಸೂತ । ತಾತಗಾಗಿ ತೆರಳಿರುವನು । ಭದ್ರೆ ಕೇಳು ॥ ೪ ॥

॥ ವಾರ್ಧಿಕ ॥

ಧರಣಿಪನ ಸುತನನಿಂತು ಪರಿತಪಿಸಿ ನುಡಿಯಲ್ಕೆ ।
ಸರಸಿರುಹ ಮುಖಿ ಕುವರಿ ಗೈವುದೇನೆನ್ನುತಲಿ ।
ಪರಿಪರಿಯೊಳಗ್ರಜನ ವಿಧಿಯಿಂದು ಮರುಗಲ್ಕೆ ದ್ರುಪದಸುತೆ ನಸುನಗುತಲಿ ॥
ಸರಸದಿಂದೈದಿದಳು ತರುಣೀಮಣಿಯು ಕಂಡು ।
ಪರಿಯೇನು ಚಿಂತೆಯೇತಕೆ ಬೆಸಸಿರೆಂದೆನಲು ।
ವರರಾಜಸುತೆ ಸತಿಯು ಬಳಿಕ ಕರೆದುಪಾಯವಂ ನೀ ತಿಳಿಸಬೇಕೆಂದಳು ॥ ೧ ॥

॥ ತಾಳ ಝಂಪೆ ॥

ಮಾನಿನಿಯ ನುಡಿಗೇಳುತಾ । ಪಾಂಚಾಲಿ । ಯಾ ನರಹರಿಯ ನೆನೆಯುತಾ ॥ ತಾ ನರೇಂದ್ರನು ಪೇಳಿದಾ । ವಚನವ । ಮಾನನಿಧಿಗಿರಿ ತೊರೆದಳು ॥ ೧ ॥

॥ ರಾಗ ಮಾರವಿ; ಏಕತಾಳ ॥

ಯಾತಕೆ ಮರುಗುವೆ । ಪ್ರೀತಿಯ ಬಿಡುಬಿಡು । ಭೀತಿಯನುರೆ ತೊರೆದು ॥ ಸೂತನ ತೋರುವೆ । ನಾತನು ಶೂರನು । ನೀ ತಿಳಿ ನಿಜ ವಿದುವು ॥ ಖಾಂಡವದಹನದಿ । ಪಾಂಡವ ಮಧ್ಯನ ಚಂಡಪರಾಕ್ರಮವ ॥ ಕಂಡವನೀತನು ಬಂಡಿಯನೋಡಿಪ । ಚಂತನು ಹರಿಯೆದುರು ॥ ೨ ॥ ಕರೆವೆನು ನೃತ್ಯದ । ಗುರುವನು ಬೇಗನೆ । ಅರಿದಿಹ ಬೃಹನಳೆಯ ॥ ಹರಿಗಳ ವಿದ್ಯೆಯ । ನರಿತಿಹ ಶೂರನ । ಕರೆತರುವೆನು ಮುದದಿ ॥ ೩ ॥

॥ ರಾಗ ಕೇದಾರ ಗೌಳ; ಅಷ್ಟತಾಳ ॥

ತರುಣಿಯನಿಂತು ಸಂತೈಸುತ್ತ ದ್ರೌಪದೀಯುರುತರ ಸಂತಸದೀ ॥ ಭರಿತ ವಿನೋದದಿಂ । ದಿದಿರ್ಗೊಂಡು ಪಾರ್ಥನ । ಕರೆದು ತಂದಳು ಅಬಲೆ ॥ ೧ ॥  ಮಂದಗಮನೆ ಮೆಲ್ಲ ಬಂದು ಭೂಪನ ಮುಂದೆ । ನಿಂದು ಪಾರ್ಥನ ತೋರುತಾ ॥ ನೊಂದುಕೊಂಡುದು ಸಾಕು ಸುಂದರ ಕುವರನೆ । ಮುಂದಿನದೇನೆಂದಳು ॥ ೨ ॥

|| ವಾರ್ಧಿಕ ||

ಫಲುಗುಣನ ಬಳಿಗೆ ಕರೆಯುತ ಪಟ್ಟಣದ ಸ್ಥಿತಿಯ |
ತಿಳಿಸುತಲಿ ಸೂತನಿಲ್ಲದೆ ಬರುವ ಬವಣೆಯನು |
ಒಲಿದು ಪರಿಹರಿಸಬೇಕೆಂದು ಉತ್ತರ ಭೂಪ ನುಡಿಯೆ
ನಸುನಗುತ ನರನು ||
ಕಲಿಸುವೆನು ನಾಟ್ಯ ಸಂಗೀತಗಳ ಪೆಣ್ಗಳಿಗೆ |
ಕಲಿತಿಹೆನೆ ಅಶ್ವವಿದ್ಯೆಯ ಕುವರ ಸಮುಂದಲಿ |
ಕಲಿಯೆದುರು ಕಲಿಯುಪ್ಪ ನಿನ್ನನೆಂತೊಲಿಸುವೆನು ಸಾಕು
ಬಿಡು ನೀನೆಂದನು || ೧ ||

|| ರಾಗ ನೀಲಾಂಬರಿ; ರೂಪಕ ತಾಳ ||

ಏತಕೆ ಚಿಂತಿಪೆ ಗುರುವರ | ಸೂತತನದೊಳೇನಿದೆಯೋ | ನೀತಿಯೆ ಸಮರಕೆ ಬೆದರುವು | ದೇತಕೆ ಸುಮ್ಮನಿಹೆ || ೧ || ಖಾಂಡವ ದಹನದ ಕಾಲದಿ | ಪಾಂಡವ ಮಧ್ಯಮ ಪಾರ್ಥನು | ದ್ದಂಡ ರಥಾದಿಯನೇರಿದ | ಪಂಡಿತನಲ್ಲವೆಲೋ || ೨ || ಇಂದಿದು ಖಾಂಡವ ದಹನವೆ | ಬಂದವರೆಲ್ಲರು ಶೂರರು | ಮುಂದಕೆ ಪೋಗುವರಾರು ನಿ | ಬಂಧವ ಮಾಡದಿರು || ೩ || ಯಾರಿಹರಂತಹ ವೀರರು | ಶೂರರು ಕೌರವ ಸೈನ್ಯದಿ | ಮೀರದಿರೆನ್ನಯ ಮಾತನು | ತೋರುವೆ ಶೌರ್ಯವನು || ೪ || ಬಲ್ಲೆಯೊ ಭೀಷ್ಮ ದ್ರೋಣರ | ಬಲ್ಲಿದ ಕೌರವರಾಯರ | ಗೆಲ್ಲುವ ಕಾರ್ಯವು ಸುಲಭವೆ | ಸಲ್ಲದು ಸಲ್ಲದಿದು || ೫ || ಹಾರುವರೊಬ್ಬರು ದ್ರೋಣರು | ಭಾರಿ ಮಹಾತ್ಮನೆ ಭೀಷ್ಮನು | ತೋರವನೇನನು ಗೆಲ್ಲೆನೆ | ಕೌರವನನು ಪೇಳು || ೬ || ರಾಮನ ಗೆಲಿದವನೊಬ್ಬನು | ಭೀಮಗೆ ಸಮಬಲನೊಬ್ಬನು | ಪಾಮರನಂತೆಸಗದಿರೆಲೊ | ಭಾಮಿನಿಯೊಡನಾಡು | ಕ್ಷತ್ರಿಯ ಕುಲದೊಳು ಜನಿಸಿದ | ಪುತ್ರನು ನಾ ತಿಳಿದಿರುವಿಯೊ | ಚಿತ್ರದ ಬೊಂಬೆಯ ನೆನೆದು ವಿ | ಚಿತ್ರವ ಮಾಡದಿರು || ೮ ||

|| ಭಾಮಿನಿ ||

ಭಳಿರೆ ಸಾಹಸಿ ನೀನು ಭಾಪುರೆ |
ಅಳಿಸು ಕೀಚಕನಂತೆ ಶತ್ರುವ |
ಮುಳಿಸು ತಾತನ ಮಾನಧನವನ್ನೆನ್ನುತುತ್ತರೆಯು ||

ಕಳೆದು ಸೂತನ ಭಯದ ಭಾವವ |
ತಳೆದು ಹರ್ಷವ ರಥವ ತರಿಸುತ |
ಕೊಳುಗುಳಕೆ ಹೊರವಂಟ ವೀರರ್ಗಿತ್ತು ಕವಚಗಳು ॥ ೧ ॥
ತೊಡು ಬೃಹನ್ನಳೆ ಕವಚವನ್ನೆನೆ |
ತೊಡಲು ತಿಳಿಯದು ತೊಡಿಸು ನೀನೆಂ |
ದೊಡನೆ ಪಾರ್ಥನು ನುಡಿದನುತ್ತರೆ ತಾನೆ ತೊಡಿಸಿದಳು ॥
ತೊಡಲು ಕವಚವನರಿಯದಿಹ ನೀ |
ಬಿಡುವೆಯೆಂತೆಲೊ ರಥವನೆನ್ನುತ |
ಲಡಿಗಡಿಗೆ ನಗುತಾ ಕುಮಾರನು ರಣಕೆ ಹೊರವಂಟ ॥ ೨ ॥

॥ ಕಂದ ॥

ಕುವರಂ ರಥವನ್ನಡರಲು |
ಕುವರಿಯು ಗಣಿಕೆಯರ ಕರೆಸಿ ಆರತಿ ಬೆಳಗಿ ॥
ಕವಿದಾ ಭೀತಿಯು ಕಪ್ಪನು |
ಸವಿಜೆಳಕಿಂ ಬೆಳಗಿಸಲ್ಕೇ ಸಂತಸದಿಂದಂ ॥ ೧ ॥

॥ ಭಾಮಿನಿ ॥

ಹರಿಯ ನೆನೆಯುತ ನರನು ಮನದಲಿ |
ಹರಿಗಳನು ವೇಗದಲಿ ಬಿಡುತಿರೆ |
ಹರಿಯೆ ಮೊದಲಾದಮರವರರಾಗಸದಿ ನೆರೆದಿರಲು ॥
ಹರಿಯಿದೆಲ್ಲವನರಿದು ಮನದಲಿ |
ಹರಿಸುತಗೆ ಜಯವಾಗಲೆನ್ನುತ |
ಹರಸುತಿರೆ, ರಥ ಮುಂದೆ ಸರಿಯಿತು ಅಮಿತ ವೇಗದಲಿ ॥ ೧ ॥

॥ ರಾಗ ಸೌರಾಷ್ಟ್ರ; ತ್ರಿವುಡೆ ತಾಳ ॥

ಇತ್ತ ಕುವರನು ರಥದ ವೇಗದ | ವರ್ತನೆಯ ಕಾಣುತ್ತ ಬೆದರುತ | ಸುತ್ತಿಬರೆ ನಡುಗುತ್ತ ಸೂತನನತ್ತು ಕರೆದ ॥ ೧ ॥ ಸೂತವೇಗವು ಸಾಕು ಬಲವು | ಳ್ಳಾತನನೀ ನಿಜ ತೇರ ನಿಲ್ಲಿಸು | ನೋತೆ,ವೇಗಕೆ ಕಣ್ಣೆ ಕಾಣದು | ಮಾತ ಕೇಳ್ತು ॥ ತಿರುಗುತಿದೆ ಶಿರವಂಗಳೆಲ್ಲಿಯೊ | ಅರಿಯಲಾರೆನು ತಡೆ ಬೃಹನ್ನಳೆ | ಮುರಿಯದಿರು ನಿನ್ನೊಡೆಯನಾಜ್ಞೆಯ | ಹರಿಸು ಭಯವ ॥ ಕಾಲಿಗೆರಗುವೆ ಕೇಳು ಸೂತನೆ | ತಾಳಲಾರೆನು ಗಾಳಿಯೆನ್ನನು | ಧೂಳಿ

ಯಂತೆತ್ತುತಿದೆ ಮೇಲಕೆ । ಬಾಲ ನಾನು ॥ ೪ ॥ ಕುದುರೆಯೋ । ನಿದು ತೇರನೆಳೆವುದು ಬದಿಗೆ ತಿರುಗಿಸಲಾರೆ ತಲೆಯನು । ಒದಗಿ ಬಂದಿದೆಯೇನು ಕಾಲವು । ಸದಯ ಪೇಳು ॥ ೫ ॥

॥ ವಾರ್ಧಿಕ ॥

ಭಯದಿಂದಲುತ್ತರಂ ಬೊಬ್ಬಿರಿದು ಕೂಗಲ್ಕೆ ।
ದಯಹೀನನಂತೆ ಪಾರ್ಥನು ನಕ್ಕನುತ್ತರನೆ ।
ದಯವೇಕೆ, ನೋಡು ಕೌರವನೆಡೆಗೆ ಕರೆದೊಯ್ದು
ಬೆದರುವುದೆ ಕುರುನೃಪತಿಗೆ ॥
ಹಯ ತೇರುಗಳನಿಲಿಸಿ ನಿಂದಿರುವ ಕೌರವನ ।
ನಯದಿಂದ ಸಾರುವುದು ತೆಗೆ ಧನುವ ಝೇಂಕರಿಸು ।
ಭಯಪಡದೆ ಭಯಪಡಿಸು ಶತ್ರುಗಳನೆನ್ನುತಲಿ
ನರನು ರಥವನು ಹಾರಿಸೆ ॥ ೧ ॥
ಧುರದಿ ದೂರದಿ ನೆರೆದ ಅರಿಸೇನೆಯನು ಕಾಣು ।
ತುರೆ ಭೀತಿಯಿಂದ ನಡುನಡುಗಿ ಧನುವನ್ನೆಸೆದು ।
ಮುರಿದು ಮೂಲೆಯೊಳೋಗಿ ಕಂಗೆಟ್ಟು ಕಳವಳಿಸಿ
ನಿಲ್ಲು ನೀ ನಿಲ್ಲೆಂದನು ॥
ಅರಿಯೆ ನಾನಸ್ತ್ರಗಳ ಶಸ್ತ್ರಗಳ ಬಾಲಕನು ।
ಮರೆತಿಹೆನು ಸೂತ ಸೂತನೆ ಕೇಳು ಕೇಳೆನ್ನ ।
ನಿರಿಯಬೇಡೆನ್ನುತಲಿ ಕುವರ ಪರಿ ಪರಿಯಿಂದ
ಪಾರ್ಥನನು ಕರೆದೊರೆದನು ॥ ೨ ॥

॥ ರಾಗ ಸೌರಾಷ್ಟ್ರ; ತ್ರಿವುಡೆ ತಾಳ ॥

ನರನೊ ಸಾರಥಿಯೊ ಕಲಿಯೊ ಯಾರಿವ । ನರಿಯೆ ಪಾರ್ಥಗೆ ತಕ್ಕ ಸೂತನು । ಅರಸಿ ಕೊಂದನು ಕೊಂದನೆನ್ನನು । ಮುಳಿದನೆನ್ನುತಲಿ ॥೧॥
ಅರಸುಗುವರನು ಕೂಗಿ ಕರೆದನು । ಹರಿಯೆ ನೀನೇ ಕಾವುದೆನ್ನುತ । ಭರದಿ ಧುಮುಕಿದನಿರದೆ ರಥದೊಳು । ಬೀಳುತೇಳುತಲಿ ॥ ೨ ॥

॥ ದ್ವಿಪದಿ ॥

ಈ ಪರಿಯೊಳುತ್ತರ ಪಲಾಯನವ ಮಾಡೆ ।
ಭೂಪ ಲೇಸೆಂದು ಹಿಂಬಾಲಿಸುತಲೋಡೆ ॥ ೧ ॥

ಮಾರಿ ಬೆಂಬತ್ತಿಹುದು ಬಿಡದೆನ್ನನೆನುತಾ ।
ಥಾರಿ ಬೆದರಿಕೆಯಿಂದಲೋಡೆ, ನಕುನಗುತಾ ॥ ೨ ॥

ನಿಲ್ಲು ನಿಲ್ಲೆಲೊ ವೀರ ಬಲ್ಲಿದನು ನೀನು ।
ಸಲ್ಲುವುದೆ ಭಯು ನಿನಗೆ ಬರುವೆನಿದೊ ನಾನು ॥ ೩ ॥

ಎಂದು ಧಾವಿಸುತುತ್ತರನ ಶಿಖೆಯು ಹಿಡಿದಾ ।
ಅಂದಿನಾಹವದ ಜಯು ವಧುವನ್ನೆ ಸೆಳೆದಾ ॥ ೪ ॥

ಪಾರ್ಥ ಕುವರನ ಹಿಡಿದು ರಥಕೆ ಕರೆತಂದು ।
ಆರ್ತನಾದವನೊಡನೆ ಪೇಳ್ದನಿಂತೆಂದು ॥ ೫ ॥

॥ ರಾಗ ಸಾವೇರಿ; ತಾಳ ಝಂಪೆ ॥

ಏನೆಲವೊ ಮೂಢಾತ್ಮ । ಮಾನಿನಿಯುರೆಮುರಿನಲಿ । ಮಾನವಿಲ್ಲದೆ ಗಳಹಿ । ಮಾನಿಗಳ ಜರೆದು ॥ ೧ ॥ ಸೂತನಾಗೆನ್ನುತಲಿ । ಏತಕೆನ್ನನು ಕಾಡಿ । ಈ ತನಕ ಕರೆತಂದೆ । ಏತರದು ಭಯುವು ॥ ೨ ॥ ನರಪರಾಂತಕರೆಲ್ಲ । ನೆರೆದಿಹರು ನೋಡಲ್ಲಿ । ನೆರೆ ನಗುವರದೊ ನಿನ್ನ । ಭರದೋಟ ಕಂಡು ॥ ೩ ॥ ತುರುಗಳನು ತರುವೆನೆಂ । ದಿರೆ ತಂಗಿಯೊಡನವಳು । ಬರಿದೆ ಪೊಗಲು ನಗಳೆ । ಅರಿಯುಹೆಲ್ಲವನು ॥ ೪ ॥

॥ ಭಾಮಿನಿ ॥

ಎಂದು ಕುವರನ ರಥಕೆ ತಾ ಕರೆ ।
ತಂದು ಗದರಿಸಿ ನುಡಿಯೆ ಪಾರ್ಥನು ।
ಮಂದಮತಿ ಕಣ್ಣೀರ ಸುರಿಸುತ ಕಾಲಿಗೆರಗುತಲಿ ॥
ನೊಂದಿಹೆನು ಬಿಡು ಸೂತರಾಯನೆ ।
ಕಂದನನು ಪೊರೆ ರಾಜಕಾರ್ಯದ ।
ಬಂಧವೇತಕೆ ನಮಗೆ, ಕಾವುದು ಎಂದನುತ್ತರನು ॥ ೧ ॥

॥ ರಾಗ ಕೇತಾರಗೌಳ; ಅಷ್ಟತಾಳ ॥

ಸೂತನೀ ಸುಮ್ಮನಿಂತೊರೆಯುವೆಯೇತಕೆ । ಘಾತುಕತನವಲ್ಲವೇ ॥ ಪಾತಕಮಯುವಿದು ಸಮರವೆಂಬುದು ಕೇಳು । ನೀ ತಿಳಿ ನಮಗೆ ಸಲ್ಲ ॥ ೧ ॥

|| ಮಾರವಿ-ಏಕತಾಳ ||

ಕುವರನೆ ಬಿಡುಬಿಡು ನಾಚುವದಿಲ್ಲವೆ | ಕುವರಿಯುರೆದುರಿನಲಿ |
ಬವರದಿ ಶೌರ್ಯವ ತೋರುವೆನೆಂದವ | ಬವರಕೆ ಬೆದರುವೆಯು || ೧ ||

|| ಕೇತಾರಗೌಳ-ಅಷ್ಟತಾಳ ||

ಕುವರಿಯು ಬಲ್ಲಳೆ ಬವರದ ಬವಣೆಯ | ಕವಿಯುವ ರಿಪುಗಳನು ||
ಅವಳ ಮಾತನು ಕೇಳಿ ಉಮನೆಡೆಗೈದಲೆ | ಒರಿದೆ ಮಾತಾಡದಿರು || ೨ ||

|| ಮಾಳವಿ-ಏಕತಾಳ ||

ಕ್ಷತ್ರಿಯ ಕುಲದಲಿ ಜನಿಸಿದ ಕುವರನೆ | ಉತ್ತರ ಏನಿದುವು ||
ಸತ್ತರೆ ಸ್ವರ್ಗವು ಗೆಲಿವರೆ ವಿಜಯವು | ಶತ್ರುಗೆ ಬೆದರದಿರು || ೨ ||

|| ಕೇತಾರಗೌಳ-ಅಷ್ಟತಾಳ ||

ಸಾಹಸ್ವರ್ಗವು ಬೇಡ ಸೂತನೆ ಮನೆಯಲಿ | ಯಾವ ಸಂತಸವಿಲ್ಲವು ||
ದೇವನಾರಿಯರೇಕೆ ಸಾಕಯ್ಯ ಅರಮನೇಗಾವುದು ಸರಿಸಮವೂ || ೩ ||

|| ಮಾಳವಿ-ಏಕತಾಳ ||

ಧುರದಿಂ ತಿರುಗಲು ಪರಪಾತಕ ಕೇಳ್ | ಧರಣಿಪಸುತ ನೀನೂ ||
ಇರದೀ ದೇಹನಿರಂತರ ನಿಶ್ಚಯ | ವರಕೀರ್ತಿಯ ತಾಳು || ೩ ||

|| ಕೇತಾರಗೌಳ-ಅಷ್ಟತಾಳ ||

ಪಾತಕ ಬಂದರೆ ಭೂಸುರರಿಹರಯ್ಯ | ಯಾತಕೆ ಕಾತರವು ||
ನೀ ತಿಳಿ ಯಾಗಧರ್ಮವ ಮಾಡಿ ಬೇಕಾದ ಕೀರ್ತಿಯು ಪಡೆಯುವೆವು || ೪ ||

|| ಮಾರವಿ-ಏಕತಾಳ ||

ಅಂಗಳ ತಡೆಯದೆ ತುರುಗಳ ಬಿಡೆನೀ | ಸರಸನ ಕುಲದೊಳಗೆ ||
ಹರಹರ ಜನಿಸಿಯು ಪೆಸರನು ಕೆಡಿಸುವೆ | ತುರುಗಳ ಪಿಡಿ ಜವದಿ || ೪ ||

|| ಭಾಮಿನಿ ||

ಪಶುಗಳನು ಕೊಂಡೊಯ್ಯಲಾವರ |
ಪಶುಗಳೇನಾಯ್ತುಮ್ಮ ಪಿತನಿಗೆ |
ಪಶುಗಳನು ಪೊರೆವಂಥ ಬಳಲಿಕೆಯೊಂದು ಹಗುರಾಯ್ತು ||

ಪಶುಗಳನು ಪೊರೆಯಲ್ಕೆ ನಾವೇ ।
ಪಶುಗಳಾಗುತ ಕಾದುವುದೆ ಈ ।
ವಸುಧೆಯೊಳು ಸಹನೆಯಲಿ ನಡೆವುದೆ ಶ್ರೇಷ್ಠತರವೆಂದ ॥ ೧ ॥

ಅಮಮ ಸಾಹಸಿ ವನಿತೆಯೆದುರಲಿ ।
ಸಮರ ತೃಣಸಮವೆಂದು ಗಜರುತ ।
ಮಮಸಮಕ್ಷದಿ ನಿಂತು ಹಿಂಸೆಯು ಪಾಪವೆಂದೆನುತ ॥
ಸಮನಿವುವೆ ವೈರಾಗ್ಯವನ್ನಿದು ।
ಸಮವೆ ಸುಡುಸುಡು ನಿನ್ನ ಜೀವವ ।
ಯಮನಿಗೀಯುವೆನೆಂದು ಫಲುಗುಣನಂದು ಕನಲಿದನು ॥ ೨ ॥

॥ ಕೇತಾರಗೌಳ-ಆದಿತಾಳ ॥

ಸಾಕೆಲವೋ ಹೇಡಿಯೆ ನಿಲ್ಲು । ಏತಕಿಂತು ನೀನಡುಗುತ್ತಿದೆಯೊ ॥
ನಾಕೊಲ್ಲುವೆನರಿಗಳವೆಲ್ಲವ । ಸೂತನ ಕೆಲಸವ ನೀಮಾಡು ॥

॥ ಸೌರಾಷ್ಟ್ರ-ತ್ರಿವುಡೆ ತಾಳ ॥

ಏನು ಪೇಳಿದೆ ಭಳಿರೆ ಬೃಹನಳೆ । ನಾನು ರಾಗದಿ ಸಮರಕ್ಕೈದುತ । ಮಾನವಾಧಿಪರನ್ನು ಗೆಲುವೆಯೊ ಹೀನಮತಿಯೇ ॥ ೧ ॥ ನೃತ್ಯವಲ್ಲ ಏದಬಲೆಯರರಿಲೋ । ನೃತ್ಯವಿದು ಕಾಲನದು ಮತ್ತರ । ನರ್ತನವ ಕಂಡಿಹೆಯೊ ನೀನುನ್ಮತ್ತ ಕೇಳು ॥ ೨ ॥ ವೀರಕುಲಸಂಜಾತನಾದೀ । ವೀರನೇ ಬೆದರುತಿರೆ ಸಮರಕೆ । ಸಾರಥಿ, ನಪುಂಸಕನೆ ನೀನಿಸ್ಸಾರನಿರುವೆ ॥೩॥ ಹಸಿದ ಮಾರಿಯು ಮಂದೆಯದು ಬಿಡು । ನುಸಳದಿರು ತೇರನ್ನು ತಿರುಗಿಸು । ಅಸಮಬಲರವರನ್ನು ಕೆಣಕಡೆ । ಜಸವಮರೆದು ॥ ೪ ॥

॥ ವಾರ್ಧಿಕ ॥

ತರಳನೀಪರಿಯಿಂದ ತೆಗಳಿನುಡಿಯಲು ಪಾರ್ಥ ।
ನುರಿಕೋಪಗೊಂಡು ಕಿಡಿಕಿಡಿಯಾಗಿ ಗರ್ಜಿಸುತ ।
ಬೊಬ್ಬಿದನೆಲೊ ಸಾಕು ನಿನ್ನಡು ಮಾತಿನಧಟು ನಾಬಲ್ಲೆ
ರಣವಿಕ್ರಮಗಳ ॥

ಬರಿದಿಂತು ಬೊಗಳಿದೊಡೆ ಗಂಟಲನೆ ಕೊಯ್ಯುವೆನು ।
ಅರುಹದಿರು ಕುಲವ ನಾಲಗೆಯಿಂದಲೆಲೆ ಮೂರ್ಖ ।
ಬರಿದೆ ಸಾರಥಿಯಾಗು, ನಡೆಹೋಗು ಎನುತಲಿ ಪಾರ್ಥ
ರಥವನ್ನೇರಿದಾ ॥ ೧ ॥

॥ ವಚನ ॥

ಇಂತು ಸ್ಮಶಾನದೆಡೆಯು ಬನ್ನಿಯು ಮರದ ಬಳಿ ಪೋಗಿ ಅರ್ಜುನಂ ಮೇಲಿರುವ ಶಸ್ತ್ರಾಸ್ತ್ರಂಗಳಂ ತಾರೆಂದುತ್ತರನಂ ನೇಮಿಸಲಾಗಿ ಅತನೆಂದ ಪರಿಯುದೆಂತೆನೆ:

॥ ರಾಗ ಸಾಂಗತ್ಯ-ರೂಪಕ ತಾಳ ॥

ಲೇಸುಲೇಸಿದು ಸೂತ ಹೆಣನ ತರುವುದೇಕೆ ಸಾಸಿರ ಶರಣೆಂಬೆ ನಾನು । ■ ಸುಬಲವಸವರುವೆನೆಂಬ ವೀರನೆ । ಮೋಸವೇನಿದು ನಿನ್ನ ಕತೆಯು ॥ ೧ ॥ ಮರುಳೆ ನೀ ಬೆದರಬೇಡವು ಹೆಣನಲ್ಲವು । ವರಪಾಂಡುಸೂನುಗಳಂದು ॥ ಮಱವಿನ ದಿನಗಳ ಕಳೆಯಬೇಕೆನ್ನುತ । ಶರಗಳ ಬಿಗಿದಿಟ್ಟರಲ್ಲಿ ॥ ೨ ॥ ಪಾಂಡವರೆಲ್ಲಿಹರೇಸೆನ್ನುತಿಹೆ ನೀನು । ಕಾಡುಕಾಡಲೆಯುವರವರ ॥ ಪಾಡೇಕೆ ನಮಗೆ ನೀಪೇಳುವುದೇನಯ್ಯ । ಬೇಡವು ಸಮಿತವು ನಮಗೆ ॥ ೩ ॥ ಗಳಹಬೇಡಂತೆಲ್ಲ ಉಳಿಯಬೇಕೆಂದಿರ್ಪೊ । ಇಳಿಸಿತಾರಯ್ಯ ಶಸ್ತ್ರಗಳ ॥ ಕಳೆದು ಭಯವ ಮನದಲಿ ನರನನುವೆನೆ । ದಿಳಿದು ಬಾರೆಂದನು ಪಾರ್ಥ ॥ ೪ ॥ ಕುವರನಿಂತಿಳಿತರೆ ಧನುವನು ಕೈಗೆತ್ತಿ । ಕವಿವ ಶರಗಳನು ಧರಿಸಿ ॥ ಬರಿವರಕೆ ಪುರುಷವೇಷವನುಟ್ಟು ಹೊರಟನು । ಪವನ ವೇಗದಿ ಪಾಂಡುಸೂನು ॥ ■ ॥

॥ ಭಾಮಿನಿ ॥

ನರನ ಸಾಹಸವನ್ನು ಕಾಣುತ ।
ಬೆರಗುಗೊಂಡುತ್ತರನು ಪ್ರಶ್ನಿಸೆ ।
ನರನು ತನ್ನರಿವನ್ನು ಕರುಣಿಸಿ ಧರಣಿಪನ ಸುತಗೆ ॥
ವರಮಹಾಗಾಂಢೀವಕೆ ಭರದಲಿ ।
ತಿರುವನೇರಿಸಿ ಶಂಖನಾದದಿ ।
ಸರಿಸಿದನು ಭಯುವಧುವನರಿಬಲಕಾನನಾಂತರಕೆ ॥

॥ ಕಂದ ॥

ಕುರುಪತಿ ಪಾರ್ಥನ ಕಾಣುತ ।
ಲೆರಡಾಗಿಸಿ ಒಲವ, ತುರುಗಳಂ ಕೊಂಡೊಯ್ಯಲ್ ॥
ತುರುಗಳ ಬಿಡೆ ಬಿಡೆನೆನ್ನುತ ।
ನರನವನನೆ ತರಿಯಲೆಂದು ರಥವಂ ಸರಿಸಲ್ ॥ ೧ ॥

॥ ಶಂಕರಾಭರಣ–ಮಟ್ಟೆತಾಳ ॥

ಸರಿಯೆರಥವು ಕಂಡು ಭೀಷ್ಮ । ನುರವಣಿಸುತ ಶರವನೆಚ್ಚ । ಸರಿಯೊ ನರನೆ ನಮ್ಮನಿರಿದು । ಸರಿಯೊ ಮುಂದಕೆ ॥ ೧ ॥ ತಡೆಯ ಬೇಡ ತಾತನೆನ್ನ । ತಡೆಯಲಿಹುದು ಚೋರ ನನ್ನ । ಕೆಡಹಿ ಮೂಢ ಗಡಣ ವನ್ನೆ । ಪಡೆವೆ ತುರುಗಳ ॥ ೨ ॥ ಎಂದು ಪಾರ್ಥ ತಡೆದ ತಾತ । ಗಂದ ದಿಂದ ಶರದಿ ನಮಿಸಿ । ಬಂದ ಕಲಿಗಳನ್ನು ಗೆಲಿದು । ಮುಂದಕೋಡಿದ ॥ ೩ ॥ ಮೆಲ್ಲ ಮೆಲ್ಲ ಸರಿಯುತಿರ್ಪ । ಮಲ್ಲರಾಯನನ್ನು ನೋಡಿ । ಕಳ್ಳನೆಲ್ಲಿಗೋಡುತಿರುವೆ । ನಿಲ್ಲು ಎಂದನು ॥ ೪ ॥ ಎಲ್ಲರನ್ನು ಗೆಲಿದು ತುರುಗ। ಳೆಲ್ಲವನ್ನು ಪಡೆದು ಪಾರ್ಥ । ಬಲ್ಲ ಗೋಪರೊಡನೆ ಕಳಿಸಿ । ಬಿಲ್ಲ ನೆತ್ತುತ ॥ ೫ ॥ ಬಲ್ಲ ವೀರರೆಲ್ಲಿ ಬರಲಿ । ಎಲ್ಲರನ್ನು ಸೋಲಿಸದಿರೆ । ಸಲ್ಲದಿಂತು ಒಬ್ಬ ವೀರ । ಗೆಲ್ಲ ಬೆದರ್ವುದೆ ॥ ೬ ॥ ಎನಲು ಮತ್ತೆ ದ್ರೋಣ ಭರದಿ । ಕಣೆಗಳಿಂದಲಿರಿದು ಸಿಕವಾ । ಹನನ ತಡೆಯೆ ಪ್ರೇಮ ಶರವೆಂ । ದೆನುತ ಪಾರ್ಥನು ॥ ೭ ॥ ಗುರುವಿಗೆರಗಿ ಲಲಿತವಾದ । ಶರಗಳಿಂದ ಪೂಜೆಯನ್ನು । ಇರಿಸುತಿರುವೆನೆನುತಲೆಚ್ಚು । ಗುರುವ ಕಳಿಸಿದ ॥ ೮ ॥

॥ ಭಾಮಿನಿ ॥

ಹಾರುವನ ಸೋಲಿಸಿದ ಪಾರ್ಥನೆ ।
ಹಾರದಿರು ಗರ್ವದಲಿ ನೋಡಿದೊ ।
ಹಾರಿಸುವೆ ಧ್ವಜಸಹಿತ ನಿನ್ನಯ ರಥವ ವಾಜಿಗಳ ॥
ವೀರ ತಡೆ ಬಲವಿದ್ದೊಡೆನ್ನುತ ।
ಶೂರ ಕರ್ಣನು ಶರಗಳಿಂದಲಿ ।
ತಾ ರಥಾಗ್ರವನಿರಿಯೆ ಕೋಪಿಸಿ ಪಾರ್ಥನಿಂತೆಂದ ॥ ೧ ॥

|| ರಾಗ ಭೋಗಷಟ್ಪದಿ--ಮಟ್ಟೆತಾಳ ||

ಎಲವೊ ಸೂತ ಪುತ್ರ ನಿನ್ನ | ಬಲುಹ ತೋರದೆನ್ನೊಳೀಗ | ನಿಲದೆ ಸಾರೋ ಸಮರಬೇಡ | ಪಳಿಯು ಬೇಡವು || ಮಲತು ಕರ್ಣ ಪೇಳ್ದನಾಗ | ಕಳೆಯುಬೇಡ ಸಮಯುವನ್ನು | ಕಲಿಯೆ ನೀನು ತಿಳಿವೆನೆಲ್ಲ | ಗೆಲಿದು ತೋರಿಸು || ೧ || ಗೆಲುವ ನಿನ್ನ ನೋಡುವನಕ | ಉಳಿವೆಯೋನೋ ಸೂತ ಪುತ್ರ | ಗಳಿಗೆಯಲ್ಲಿ ಬಳಲಿ ಹಿಂದೆ | ಸರಿಯುದಿರುವೆಯಾ || ಬಳಲಿ ನಡೆ ವರಾರು ಎಂದು | ತಿಳಿಸಲಿರುವೆ ಬೇಗನೆಂದು | ತಳೆದು ಶೌರ್ಯವನ್ನು ಶರದ | ಮಳೆಯು ಸುರಿಸಿದ ||೨|| ಎಲ್ಲಿ ನಿನ್ನ ಶರ ಸಮೂಹ | ವೆಲ್ಲಿ ನಿನ್ನ ಚಾಪವೆಂಪು | ಎಲ್ಲವನ್ನು ಕಡಿದು ರಣದ | ಮಲ್ಲ ಗಜರಿದ || ಬಲ್ಲೆನೆಂದ ಕರ್ಣ ಶಸ್ತ್ರ | ವೆಲ್ಲವನ್ನು ಕಳೆದುಕೊಂಡು | ಮೆಲ್ಲ ಸರಿಯೆ ಗುರುವಿನ ಮಲ ಪುತ್ರ ಬಂದನು || ೩ || ಬಂದ ಬಾಲನನ್ನು ಪಾರ್ಥ | ಸಂಧಿಸಲ್ಕೆ ಶರ ಗಳಿಂದ | ನೊಂದು ತೆರಳೆ ಕೋಪಗೊಂಡು ದ್ರೋಣನೆದುರಿಸೆ || ಬಂದ ಕಾರ್ಯವೇನು ಗುರುವೆ | ಚಂದದಿಂದ ಶಿಷ್ಯ ಶ್ರೇಷ್ಠ | ನಂದವನ್ನು ಕಾಂಬೆ ನೆಂದು ದ್ರೋಣನೆಂದನು || ೪ ||

|| ರಾಗ ಪಂಚಗತಿ, ಮಟ್ಟೆತಾಳ ||

ಭಳಿರೆ ನಿನ್ನ ಸಾಹಸಕ್ಕೆ | ಮುಳಿಯುದಿರುವೆ ಭಾವು ಪಾರ್ಥ | ಕಳೆದೆ ಯೆನ್ನ ಶರವನೆಲ್ಲ | ತಳೆದು ಶೌರ್ಯವ || ೧ || ಎಂದು ದ್ರೋಣನವನ ಸೂತ | ಗಂಡು ಹೊಡೆದು ಗರ್ಜಿಸಲ್ಕೆ | ನೊಂದ ಕುವರನನ್ನು ಪಾರ್ಥ ಸಂತ ಯಿಸಿದನು || ೨ || ಕೆಂಡ ಕಣ್ಣೊಳುದುರೆ ಕೋಪ | ಗೊಂಡು ತೀಕ್ಷ್ಣ ಶರವನೆತ್ತಿ | ಕೊಂಡು ಗುರುವನಿರಿಯುತವನ | ದಿಂಡು ಕೆಡೆಹನು || ೩ ||

|| ಕಂದ ||

ದ್ರೋಣನು ಈ ತೆರ ತೆರಳಲ್ |
ಬಾಣದ ಹತಿಯಿಂದ ಬಳಲಿ ನಿಂದಾ ಭೀಷ್ಮಂ ||
ತಾಣುತ ಖತಿಗೊಂಡಾತನ |
ಸೂನುವ ಬಡಿಗೊತ್ತಿ ಭೀಮನಾಗಃತಲಿರಿದಂ ||

|| ರಾಗ ಭೈರವಿ, ತ್ರಿವುಡೆತಾಳ ||

ಆಯಿತಾಗ | ಸಮರವು | ಆಯಿತಾಗ || ರಾಯಗಂಗಾ ಸೂನು ಪಾರ್ಥಗೆ | ಸಾಯಕದ ಮಳೆ ಸುರಿಸೆ ಕೋಪದಿ | ಆಯಿತಾಗ || ಶರಗಳಾಗನಿ ತುಂಬ ಪಸರಿಸಿ | ನೆರೆದ ಸೈನ್ಯವ ಕೊಚ್ಚಲು || ಮರೆದು ನೋಡುವ ಸುರಸಮೂಹವ | ಕರಿಯ ಕತ್ತಲೆ ಮುಚ್ಚಲು || ಇರಿವ ಸರಳನು, ಕಡಿವ ಸರಳನು | ಸುರಿಸೆ ಕತ್ತಲೆ ಹೆಚ್ಚಲು || ಸುರಿಶವಗಳ ರಾಶಿಯಿಂದಲಿ | ಧುರದ ಕ್ಷೇತ್ರವು ಮುಚ್ಚಿರೇ ಪರಿ ಆಯಿತಾಗ || ೧ ||

|| ರಾಗ ಕಾಂಬೋಜ--ಝಂಪೆತಾಳ ||

ಭಳಿರೆ ಭೀಷ್ಮಾರ್ಜುನರೆ | ಕಲಿತನಕ್ಕೆ ಮೆಚ್ಚಿದೆನು | ಇಳೆಯೊಳಗೆ ಸಮರಿಲ್ಲ ನಿಮಗೆ || ಬಲದೊಳಗೆ ಸಮರಯ್ಯ | ಕಾಳಗದೊಳಿಬ್ಬರೂ | ಛಲ ಜಾಣರೆಂದನುತ್ತರನು || ೧ || ಎಂದು ಕುವರನು ಮೆಚ್ಚಿ | ದಂದವನು ಕಾಣುತ್ತ | ಚಂದದಿಂ ಬಿಲ್ಲ ತೂಗುತಲಿ || ಮಂದತನವನು ಬಿಟ್ಟು | ಸಂಧಿಸುತ ಶರಗಳನು | ಕುಂದಿಸಿದ ತಾತನನು ವಿಜಯ || ೨ ||

|| ಕಂದ ||

ದೇವವ್ರತ ನಿಂತೊರಗಲು |
ದೇವತೆಗಳು ಸುಮವ ಸುರಿಸೆ ದುಂದುಭಿ ಮೊಳಗಲ್ ||
ಭೂವರ ಕೌರವ ಕೋಪದಿ |
ದೇವಪ್ರಿಯನನ್ನು ತರಿವೆನೆನುತಲಿ ಬಂದಂ || ೧ ||
ಕೌರವನನು ಹೊಡೆದುರುಳಿಸಿ |
ವೀರಧನಂಜಯನುಮುಳಿದಲಿರಿಸು ಭಟರನು ||
ಶೂರತನದೊಳಂದಿದಿರಿಸಿ |
ಮಾರನ ಸಂಮೋಹನಾಸ್ತ್ರವನು ತಾನೆಚ್ಚಂ || ೨ ||

|| ವಾರ್ಧಿಕ ||

ಮೋಹನಾಸ್ತ್ರವು ತನ್ನ ಕರಗಳನು ಪಸರಿಸುತ |
ಮೋಹಿಸುತ ಸಮರಾಂಗಣದ ಸುತ್ತ ಸುಳಿಯುಲ್ಕೆ |
ಮೋಹಿನಿಯ ಕಂಡ ದೈತ್ಯರ ತೆರದಿ ಶಸ್ತ್ರಗಳು ಮೋಹವಶರಾಗುತಿರಲು ||

ಮೋಹದಿಂ ಗೆಲಿದೆಯೆಲ ಕಲಿಪಾರ್ಥನೆನ್ನುತಲಿ ।
ಮೋಹಿನಿಯು ಗೆಲಿದಾ ಭೀಷ್ಮನು ನಕ್ಕು ನುಡಿಯುತಿರೆ ।
ಮೋಹದಿಂ ನಿದ್ರಿಸಿತು ಸಚರಾಚರಂ ಸೈನ್ಯ ಕುವರನುರಿ ಬೆರಗಾಗಲು ॥೧॥

ಬಳಿಕಲಾ ಪಾರ್ಥನುತ್ತರನೊಡನೆ ರಥದಿಂದ ।
ಇಳಿದು ಕೌರವನೃಪನ ಮುಕುಟಮಣಿಯನು ಕಿತ್ತು ।
ಕಳೆದು ರಥಿಕರ ಭೂಷಣಾದಿಗಳ ಪಡಕೊಂಡುರಿ ನಪುಂಸಕ ವೇಷವ ॥
ನೊಲಿದು ಧರಿಸುತ ಕುವರನನು ರಥಕ್ಕೇರಿಸುತ ।
ಬಳಿಕ ಸಾರಥಿಯಾಗಿ ಅಮಿತ ವೇಗದಿ ಮರಳೆ ।
ಕಳೆಮುದಾ ರಣದ ಶ್ರಮ ವಿಜಯಮುನ್ಮಾದದಲಿ, ತೇರು ಪುರವನು ಸೇರಿತು ॥
॥ ೨ ॥

॥ ಕಂದ ॥

ಸಾರಿದನುತ್ತರ ಸಮರದಿ ।
ಭಾರಿಯ ಜಯಮಾಯ್ತು ತನಗೆ ಕೌರವನೆಂಬಾ ॥
ಮಾರಿಯನಿರಿದೆನು ಎನ್ನುತ ।
ವೀರ ಧನಂಜಯನು ಪೇಳ್ದ ತೆರದೊಳು ಪುರದೊಳ್ ॥ ೧ ॥

**॥ ಮಂಗಳ ಪದ ॥**

ಮಂಗಲಂ । ಜಯ । ಮಂಗಲಂ ॥ ನಂದನ ಕಂದ । ಮುಕುಂದನಿಗೆ । ಸಿಂಧುಶಯನ ದೇವ ವಂದಿತಗೆ ॥ ಮಂದರಧರನಿಗೆ ಪೆರಡಾಲದುದನೇಶ । ಗಂದದಿ ಪಾಲಿಪ ಹರಿಹರ ಮೂರ್ತಿಗೆ ॥ ಮಂಗಲಂ ॥

**॥ ಶ್ರೀ ಕೃಷ್ಣಾರ್ಪಣಮಸ್ತು ॥**

Edited, Printed & Published by K. V. Shenoy
at The Prabhat Printers, Ltd., Mangalore.